"ಶ್ರೀ ಶ್ರೀನಿವಾಸನ ದೇವರನಾಮಗಳು "

ಸಂಗ್ರಹ – ಆರ್. ನರಹರಿ (9916904341)

**ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।**
**ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯತೇ ನಮಃ ॥**

ಮಂಗಳವಾದ ದಿವ್ಯವಾದ ಶರೀರವನ್ನು ಧರಿಸಿರುವ ಇಷ್ಟಾರ್ಥವನ್ನು ನೀಡುವ ನಮ್ಮ ಪಾಪ ಪರಿಹಾರಕನೂ ಒಡೆಯನೂ ಆದ ಶ್ರೀನಿವಾಸನೆನಿಸಿದ ನಿನಗೆ ನಮಸ್ಕಾರವು.

## ಭಗವಂತನ ಅಸಾಧಾರಣ ಲಕ್ಷಣ

ಭಗವಂತನಿಗೆ ಮೂವತ್ತೆರಡು ಲಕ್ಷಣಗಳಲ್ಲದೆ ಲಕ್ಷ್ಮೀ, ಮತ್ತು ವಾಯುದೇವರಲ್ಲೂ ಕಾಣಬರದ ವಿಶಿಷ್ಟ ಲಕ್ಷಣಗಳಿವೆ.

೧. ಬಲಭಾಗದ ಹಸ್ತದಲ್ಲಿ ಸಾವಿರ ಅಲಗುಗಳುಳ್ಳ ಚಕ್ರದ ಚಿಹ್ನೆ ಇರುತ್ತದೆ

೨. ಎಂಟು ಮೂಲೆಗಳುಳ್ಳ ಗದೆಯ ಚಿಹ್ನೆ ಇರುತ್ತದೆ

೩. ಎಡಭಾಗದ ಮೇಲಿನ ಹಸ್ತದಲ್ಲಿ ನೂರು ಸುಳಿಯುಳ್ಳ ಶಂಖದ ಚಿಹ್ನೆಯು, ಕೆಳಭಾಗದ ಹಸ್ತದಲ್ಲಿ ಸಾವಿರದಳಗಳುಳ್ಳ ಪದ್ಮದ ಚಿಹ್ನೆಯೂ ಇರುತ್ತದೆ. ಹಾಗೆ ಪಾದತಲಗಳಲ್ಲಿ ವಜ್ರಾಂಕುಶ, ಧ್ವಜ, ಪದ್ಮರೇಖೆಗಳಿರುತ್ತವೆ.

### ರಾಗ – ಶಂಕರಾಭರಣ : ತಾಳ – ಅಟತಾಳ

ವೆಂಕಟರಮಣನೆ ಬಾರೊ । ಶೇಷಾಚಲವಾಸನೆ ಬಾರೊ ।ಪ।
ಪಂಕಜನಾಭ ಪರಮ ಪವಿತ್ರ । ಶಂಕರ ಮಿತ್ರನೆ ಬಾರೊ ।ಅ ಪ।
ಮುದ್ದು ಮುಖದ ಮಗುವೆ ನಿನಗೆ ಮುದ್ದು ಕೊಡುವೆನು ಬಾರೊ
ನಿರ್ದಯವೇಕೊ ನಿನ್ನೊಳಗೆ ನಾನು ಪೊಂದಿದ್ದೇನು ಬಾರೊ ।೧।
ಮಂದರಗಿರಿಯನೆತ್ತಿದ ಆನಂದ ಮೂರ್ತಿಯೆ ಬಾರೊ
ನಂದನ ಕಂದ ಗೋವಿಂದ ಮುಕುಂದ ಇಂದಿರೆಯರಸನೆ ಬಾರೊ ।೨।
ಕಾಮನಯ್ಯ ಕರುಣಾಳೊ ಶ್ಯಾಮಲ ವರ್ಣನೆ ಬಾರೊ
ಕೋಮಲಾಂಗ ಶ್ರೀಪುರಂದರವಿಟ್ಠಲನೆ ಸ್ವಾಮಿ ರಾಯನೆ ಬಾರೊ ।೩।

### ರಾಗ – ಆರಭಿ : ತಾಳ – ಅಟತಾಳ

ಬಾರೋ ಮನಕೆ । ಹೇ ಶ್ರೀನಿವಾಸ ।ಪ।
ಪಾಪಿ ನಾ ನೆಂಬಿಯಾ ಶ್ರೀಪತಿ ನಿನ್ನ ನಾಮಕೆ
ಪೋಪದ ಪಾಪ ಮಾಡಲಾಪೆನೆ ಯೆಂದಿಗು ।೧।
ನೀನು ಕುಣಿಸಿದಂತೆ ನಾನು ಕುಣಿವೆನಯ್ಯ ।
ಏನು ಇದಕೆ ಅನುಮಾನವಿಲ್ಲವೊ ದೇವ ।೨।
ಸಿರಿಯಿಂದೊಪ್ಪುತ ಪರಿವಾರಸಹಿತಾಗಿ ।
ವರದಗೋಪಾಲವಿಟ್ಠಲರೇಯ ಬೇಗ ।೩।

"ಶ್ರೀ ಶ್ರೀನಿವಾಸನ ದೇವರನಾಮಗಳು "

ಸಂಗ್ರಹ – ಆರ್. ನರಹರಿ (9916904341)

**ರಾ ಗ – ಮ ಧ್ಯ ಮಾ ವ ತಿ : ತಾ ಳ – ಅ ಟ ತಾ ಳ**

ಬಂದು ನಿಂದಿಹ ನೋಡಿ, ಭೂತಳದಿ ವೆಂಕಟ
ಇಂದಿರೆಯ ಒಡಗೂಡಿ, ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ, ಆನಂದಗೂಡಿ । ಪ ।
ವಂದಿಸುತ ಮನದೊಳಗೆ ಇವನಡಿ ದ್ವಂದ್ವ ಭಜಿಸಲು ಬಂದ ಭಯಹರ
ಇಂದುಧರ ಸುರವೃಂದನುತ ಗೋವಿಂದ ಘನ ದಯಾಸಿಂಧು ಶ್ರೀಹರಿ । ಅ ಪ ।

ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು ಸೇರಿ ಸೇವಿಪರಲ್ಲಿ ಸನಕಾದಿನುತ ಶೃಂಗಾರ ನಿಧಿ
ಅಂಗದಲ್ಲಿ ಮುತ್ತಿನಲಿ ಶೋಭಿಪ ಹಾರ ಪೊಂದಿಹುದಿಲ್ಲಿ ವಿಸ್ತಾರದಲ್ಲಿ
ವಾರವಾರಕೆ ಪೂಜೆಗೊಂಬುವ ಹಾರ ಮಕುಟಾಭರಣ ಕುಂಡಲಾಧಾರ ಭುಜ ಕೇ
ಯೂರಭೂಷಿತ ಮಾರಪಿತ ಗುಣ ಮೋಹನಾಂಗ ಚಾರು ಪೀತಾಂಬರ ಕಟಿ ಕರವೀರ ಕ
ಲ್ಹಾರಾದಿ ಪೂವಿನ ಹಾರ ಕೊರಳೊಳು ಎಸೆಯುತಿರೆ ವದನಾರವಿಂದನು ನಗುತ ನಲಿಯುತ । ೧ ।

ಎಲ್ಲ ಭಕುತರಭೀಷ್ಟ ಕೊಡುವುದಕೆ ತಾ ಕೈ ವಲ್ಯಸ್ಥಾನವ ಬಿಟ್ಟ ಶೇಷಾದ್ರಿ ಮಂದಿರ
ದಲ್ಲಿ ಲೋಲುಪ ದಿಟ್ಟ ಕಸ್ತೂರಿಯಿಟ್ಟ ಚೆಲ್ವ ಫಣೆಯಲಿ ಶೋಭಿಸುವ ಸಿರಿವಲ್ಲಭನ
ಗುಣ ಪೊಗಳದಿಹ ಜಗ ಖುಲ್ಲರೆದೆದಲ್ಲಣ ಪರಾಕ್ರಮ ಮಲ್ಲಮರ್ದನ ಮಾತುಳಾರಿ
ಫಲ್ಗುಣನ ಸಖ ಪ್ರಕಟನಾಗಿಹ ದುರ್ಲಭನು ಅಘದೂರ ಬಹುಮಾಂಗಲ್ಯ ಹೃದಯನು
ಸೃಷ್ಟಿಗೆ ಉಲ್ಲಾಸ ಕೊಡುತಲಿ ಚಂದದಿಂದಲಿ । ೨ ।

ಪದಕ ಕೌಸ್ತುಭಧಾರ ಸರಿಗೆಯ ಕಂಧರ ಸುದರುಶನದರಧಾರ ಸುಂದರ ಮನೋಹರ
ಪದಯುಗದಿ ನೂಪುರ ಇಟ್ಟಿಹನು ಸನ್ಮುನಿ ಹೃದಯಸ್ಥಿತ ಗಂಭೀರ ಬಹು ದಾನಶೂರ
ವಿಧಿ ಭವಾದ್ಯರ ಪೊರೆವ ದಾತನು ತುದಿ ಮೊದಲು ಮಧ್ಯಮ ವಿರಹಿತನು
ಉದುಭವಾದಿಗಳೀವ ಕರ್ತನು ತ್ರಿದಶಪೂಜಿತ ತ್ರಿಭುವನೇಶ ಸದುವಿಲಾಸದಿ
ಸ್ವಾಮಿತೀರ್ಥದಿ ಉದಿಸುತಿರೆ ಸಿರಿ ಮಹಿಳೆ ಸಹಿತದಿ ಪದುಮನಾಭ
ಪುರಂದರವಿಟ್ಠಲ ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ । ೩ ।

**ರಾ ಗ – ಬೇ ಹಾ ಗ್ : ತಾ ಳ – ಆ ದಿ ತಾ ಳ**

ದೇವ ಬಂದ ನಮ್ಮ ಸ್ವಾಮಿ ಬಂದನೊ ದೇವರ ದೇವ ಶಿಖಾಮಣಿ ಬಂದನೊ। ಪ ।
ಉರಗಶಯನ ಬಂದ ಗರುಡಗಮನ ಬಂದ ನರಗೊಲಿದವ ಬಂದ ನಾರಾಯಣ ಬಂದ । ೧ ।
ಮಂದರೋದ್ಧರ ಬಂದ ಮಾಮನೋಹರ ಬಂದ ಬೃಂದಾವನಪತಿ ಗೋವಿಂದ ಬಂದನೊ। ೨ ।
ನಕ್ರಹರನು ಬಂದ ಚಕ್ರಧರನು ಬಂದ ಅಕ್ರೂರಗೊಲಿದ ತ್ರಿವಿಕ್ರಮ ಬಂದನೊ । ೩ ।
ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ ಅಕ್ಷಯ ಫಲದ ಶ್ರೀಲಕ್ಷ್ಮೀರಮಣ ಬಂದ । ೪ ।
ನಿಗಮಗೋಚರ ಬಂದ ನಿತ್ಯತೃಪ್ತನು ಬಂದ ನಗೆಮುಖ ಪುರಂದರವಿಟ್ಠಲ ಬಂದನೊ । ೫ ।

"ಶ್ರೀ ಶ್ರೀನಿವಾಸನ ದೇವರನಾಮಗಳು "

ಸಂಗ್ರಹ – ಆರ್. ನರಹರಿ (9916904341)

**ರಾ ಗ – ಪಂ ತು ವ ರಾ ಳಿ : ತಾ ಳ – ಆ ದಿ ತಾ ಳ**

ವೈದ್ಯ ಬಂದ ನೋಡಿ ವೆಂಕಟನೆಂಬೊ ।ಪ।
ವೈದ್ಯ ಬಂದ ವೇದವೇದ್ಯ ನೋಡೀಗಲೇ ಶ್ರೀದೇವಿ ರಮಣನು ಶ್ರೀನಿವಾಸನೆಂಬೊ ।ಅ ಪ।
ಎಷ್ಟು ದಿನದ ರೋಗಗಳೆಂಬುದ ಬಲ್ಲ। ಗಟ್ಟಿಯಾಗಿ ಧಾತು ರಸಗಳ ಬಲ್ಲ।
ಕಷ್ಟಪಡಿಸದೆನ್ನ ಭವರೋಗ ಬಿಡಿಸುವ। ಶಿಷ್ಟವಾದ ದೇಹ ಕೊಟ್ಟು ಕಾಯುವನೀತ ।೧।
ಹೊನ್ನು ಹಣಂಗಳ ಅನ್ನವನನುಸರಿಸಿ। ತನ್ನ ದಾಸರೆಂಬೊ ನಿಜವ ನೋಡಿ।
ಚೆನ್ನಾಗಿ ಜಿಹ್ವೆಗೆ ಸ್ವಾದವಾಗಿರುವಂಥ। ತನ್ನ ನಾಮಾಮೃತ ದಿವ್ಯ ಔಷಧವೀವ ।೨।
ಈತ ದಿಟ್ಟಿಸಿ ನೋಡೆ ಎಳ್ಳಷ್ಟು ರೋಗವಿಲ್ಲ। ಈ ತನುವಿಗೆ ಎಂದೆಂದೂ ರೋಗ ಬರಲರಿಯದು।
ಈತಾನಂತ ರೂಪದಿ ಜೀವರಿಗೆ ಮುನ್ನ ಪ್ರೀತಿಯಿಂದಲಿ ಭವರೋಗ ಬಿಡಿಸುವ ।೩।
ಧರ್ಮ ವೈದ್ಯನಿವ ಜಗಕೆಲ್ಲ ಒಬ್ಬನೆ ಮರ್ಮ ಬಲ್ಲ ರೋಗ ಜೀವಂಗಳ।
ನಿರ್ಮಲವಾಗಿಹ ತನ್ನ ನಾಮಸ್ಮರಣೆ ಒಮ್ಮೆ ಮಾಡಲು ಭವರೋಗ ಬಿಡಿಸುವ ।೪।
ಅನ್ಯ ವೈದ್ಯನೇಕೆ ಅನ್ಯ ಔಷಧವೇಕೆ। ಅನ್ಯ ಮಂತ್ರ ತಂತ್ರ ಜಪವೇಕೆ।
ಚೆನ್ನ ಶ್ರೀಪುರಂದರವಿಟ್ಠಲನ ನೆನೆದರೆ ಮನ್ನಿಸಿ ಸಲಹುವ ವೈದ್ಯ ಶಿರೋಮಣಿ ।೫।

**ರಾ ಗ – ಮು ಖಾ ರಿ : ತಾ ಳ – ಅ ಟ ತಾ ಳ**

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಬೆ॥ ಪ।
ಕಂಡೆ ತಿರುಪತಿ ವೆಂಕಟೇಶನ ಕಾರಣಾತ್ಮಕ ಸಾರ್ವಭೌಮನ
ಕಾಮಿತಾರ್ಥಗಳೀವ ದೇವನ ಕರುಣನಿಧಿ ಎಂದೆನಿಸಿ ಮೆರೆವನ ।ಅ ಪ।
ಕೋಟಿ ಸೂರ್ಯಪ್ರಕಾಶವೆನಿಪ ಕಿರೀಟವನು ಮಸ್ತಕದಿ ಕಂಡೆನು
ನೋಟಕಾಶ್ಚರ್ಯವಾದ ನಗೆ ಮುಖನೊಸಲಿನಲಿ ತಿರುಮಣಿಯ ಕಂಡೆನು
ಸಾಟಿಯಿಲ್ಲದೆ ಚತುರ ಹಸ್ತದಿಶಂಖ ಚಕ್ರ ಗದಾಬ್ಜ ಕಂಡೆನು
ಬೂಟಕದ ಮಾತಲ್ಲ ಕಾಣಿರೊಭೂರಿ ದೈವರ ಗಂಡನಂಘ್ರಿಯ ।೧।

ತಪ್ಪು ಕಾಣಿಕೆ ಕಪ್ಪಗಳನು ಸಪ್ತದ್ವೀಪಗಳಿಂದ ತರಿಸುವ
ಉಪ್ಪು ಓಗರಗಳನೆ ಮಾರಿಸಿಉಚಿತದಿಂದಲಿ ಹಣವ ಗಳಿಸುವ
ಇಪ್ಪತ್ತು ದುಡ್ಡಿಗೆ ಸೇರು ತೀರ್ಥವಒಪ್ಪದಲಿ ಕ್ರಯ ಮಾಡಿಕೊಡಿಸುವ
ಸರ್ಪಶಯನನ ಸಾರ್ವಭೌಮನಅಪ್ಪ ವೆಂಕಟರಮಣನಂಘ್ರಿಯ ।೨।
ಉರದಿ ಸಿರಿದೇವಿಯಿರಲು ಕಂಡೆನು ಉನ್ನತದಿ ಕೌಸ್ತುಭವ ಕಂಡೆನು
ಗರುಡ ಕಿನ್ನರ ನಾರದಾದಿ ಗಂಧರ್ವರೆಡ ಬಲದಲ್ಲಿ ಕಂಡೆನು
ತೆರತೆರದಿ ಭಕ್ತರಿಗೆ ವರಗಳಕರೆದು ಕೊಡುವುದ ನಾನು ಕಂಡೆನು
ಶರಧಿಶಯನನ ಸಾರ್ವಭೌಮನ ವರದಪುರಂದರವಿಟ್ಠಲನಂಘ್ರಿಯ। ೩।

**ರಾ ಗ – ಜೋ ಗ : ತಾ ಳ – ಆ ದಿ ತಾ ಳ**

ಗೋವಿಂದ, ನಿನ್ನಾನಂದ। ಸಾಧನ ಸಕಲವೊ ನಿನ್ನಾನಂದ ।ಪ।
ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ ನಿರ್ಮಲಾತ್ಮಕನಾಗಿ ಇರುವುದೆ ಆನಂದ। ೧।
ಸೃಷ್ಟಿ ಸ್ಥಿತಿ ಲಯ ಕಾರಣ ಗೋವಿಂದ ಈ ಪರಿ ಮಹಿಮೆಯ ತಿಳಿಯೋದೆ ಆನಂದ ।೨।
ಮಂಗಳಮಹಿಮ ಶ್ರೀಪುರಂದರವಿಟ್ಠಲ ಹಿಂಗದೆ ದಾಸರ ಸಲಹೋದೆ ಆನಂದ ।೩।

"ಶ್ರೀ ಶ್ರೀನಿವಾಸನ ದೇವರನಾಮಗಳು "

ಸಂಗ್ರಹ – ಆರ್. ನರಹರಿ (9916904341)

**ರಾ ಗ – ಮೋ ಹ ನ : ತಾ ಳ – ಆ ದಿ ತಾ ಳ**

ಇಂಥಾ ಪ್ರಭುವ ಕಾಣೆನೊ ಈ ಜಗದೊಳಗಿಂಥಾ ಪ್ರಭುವ ಕಾಣೆನೊ । ಪ ।
ಇಂಥಾ ಪ್ರಭುವ ಕಾಣೆ ಶಾಂತಮೂರುತಿ ಜಗದಂತರಂಗನು ಲಕ್ಷ್ಮೀಕಾಂತs ಸರ್ವಾಂತರ್ಯಾಮಿ । ಅ ಪ ।
ಬೇಡಿದಿಷ್ಟವ ಕೊಡುವ ಭಕ್ತರ ತಪ್ಪು ನೋಡದೆ ಬಂದು ಪೊರೆವ
ಗಾಡಿಕಾರನು ಗರುಡಾರೂಢ ಗುಣವಂತ ಮಹಾಪ್ರೌಢಪ್ರತಾಪಿ ಜಗದಿ ಗೂಢದಿಂ ಸಂಚರಿಪ
ಪಾಡಿ ಪೊಗಳಿ ಕೊಂಡಾಡುವವರ ಮುಂದಾಡುತಲಿಪ್ಪನು ನಾಡೊಳಗಿದ್ದರು
ಕೇಡಿಗನೇ ನಾಡಾಡಿಗಳಂದದಿ ಈಡುಂಟೇನೋ ಈ ವೇಂಕಟಗಿಂಥಾ । ೧ ।
ನಿಗಮತತಿಗಳರಿಯದ ನೀರಜಭವಾದ್ಯಗಣಿತ ಸುರರು ಕಾಣದ ಜಗದೊಡೆಯನು
ಭಕ್ತರುಗಳಿಗೊಲಿದು ತ್ರಿಸ್ಥಾನಗಳ ತ್ಯಜಿಸಿ ಕಲಿ ಯುಗದಿ ಭೂಮಿಗೆ ಬಂದು
ಅಗಣಿತಸುಗುಣಾರ್ಣವ ಶ್ರೀಹರಿಯೇ ಜಗದೊಳು ಸೇವಾದಿಗಳನು
ಕೊಳುತಿಹ ಅಘಹರ ಮೋಕ್ಷಾದಿಗಳನೆ ನೀಡುತ ನಗೆಮೊಗದಲಿ ಚನ್ನಿಗ ನಿಂತಿಹನೊ। ೨ ।
ಭಾರ್ಗವೀ ಭೂಮಿ ವಲ್ಲಭ ಭವದೂರ ಭಕ್ತವರ್ಗಕ್ಕೆ ಇವ ಸುಲಭ
ನಿರ್ಗುಣ ನಿರ್ವಿಕಾರ ಸ್ವರ್ಗದೈಶ್ವರ್ಯಕಿಂತಾನರ್ಘ್ಯ ಪದವನೀವ ದೀರ್ಘಾಯುವಂತನೀತ
ಭಾರ್ಗವರಾಮ ನೃಪರ್ಗಳೆಲ್ಲರಣಾಗ್ರದಿ ಜಯಿಸಿದ ಉಗ್ರಪ್ರತಾಪಿ
ಅಗ್ರಗಣ್ಯ ಸದ್ವಿಗ್ರಹ ಶ್ರೀಮದನುಗ್ರಹ ಮಾಡುತ ದುರ್ಗುಣ ಕಳೆವ । ೩ ।
ನಿರ್ದುಃಖಾನಂದ ಭರಿತಾ ನಿರ್ವಾಣಸುಖಕೆ ಆರ್ದ್ರಹೃದಯ ತೋರಿದ
ನಿದ್ರೆಯೊಳಗಿದ್ದವಗುಪದ್ರ ಬಿಡಿಸಿ ದೈತ್ಯ ಕ್ಷುದ್ರನ್ನಾ ಕೊಲಿಸಿ ಸು–
ಭದ್ರ ಜಗಕೆ ಇತ್ತ ನಿರ್ದಯನಲ್ಲ ಸಮುದ್ರಶಯನ ಗೋ–
ವರ್ಧನ ಗಿರಿಯನು ಉದ್ಧರಿಸಿದ ಯದುವರ್ಧನ ದನುಜ ವಿ–
ಮರ್ದನ ಲಕ್ಷ್ಮೀಜನಾರ್ದನ ವರಶೇಷಾದ್ರಿ ನಿವಾಸ । ೪ ।
ವಾರಿಜಾಸನ ಮನ್ಮಥಾ ಈರ್ವರು ಸುತರು ಸರತರಂಗಿಣಿ ತನುಜಾ
ಪುರವೇ ವೈಕುಂಠ ಇಂದ್ರಾದ್ಯಮರರು ಕಿಂಕರರು ಗರುಡ ವಾಹನ
ಉರಗ ಪರಿಯಂಕ ನಿಷ್ಕಳಂಕ ಸರಿ ದೊರೆಗಳ ನಾ–
ನರಿಯೆನು ವೆಂಕಟಗಿರಿಯಲಿ ಇರುತಿಹ ಕರುಣೆಗಳರಸನೆ
ಮರೆಯದೆ ಸಲಹೋ ಶರಣಾಗತರನು ಮರುತಾಂತರ್ಗತ ಸಿರಿವಿಜಯವಿಟ್ಠಲ । ೫ ।

**ರಾ ಗ – ಕಾ ಂ ಬೋ ದಿ : ತಾ ಳ – ಝು ಂ ಪೆ ತಾ ಳ**

ಈ ಪರಿಯ ಸೊಬಗು ಇನ್ನಾವ ದೇವರಲಿ ಕಾಣೆ । ಪ ।
ಗೋಪೀಜನಪ್ರಿಯ ಗೋಪಾಲಗಲ್ಲದೆ । ಅ ಪ ।
ದೊರೆಯತನದಲಿ ನೋಡೆ ಧರಣಿದೇವಿಗೆ ರಮಣ ಸಿರಿಯತನದಲಿ ನೋಡೆ ಶ್ರೀಕಾಂತನು ।
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ ಗುರುವುತನದಲಿ ನೋಡೆ ಜಗದಾದಿಗುರುವು। ೧ ।
ಪಾವನತ್ವದಿ ನೋಡೆ ಅಮರಗಂಗಾಜನಕ ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ ಆವ ಧೈರ್ಯದಿ ನೋಡೆ ಅಸುರಾಂತಕ । ೨ ।
ಗಗನದಲಿ ಸಂಚರಿಪ ಗರುಡ ದೇವನೆ ತುರಗ ಜಗತೀಧರ ಶೇಷಪರಿಯಂಕ ಶಯನ
ನಿಗಮಗೋಚರ ಪುರಂದರವಿಟ್ಠಲಗಲ್ಲದೆ ಮಿಗಿಲಾದ ದೈವಗಳಿಗೀಭಾಗ್ಯವುಂಟೆ । ೩ ।

"ಶ್ರೀ ಶ್ರೀನಿವಾಸನ ದೇವರನಾಮಗಳು "

ಸಂಗ್ರಹ – ಆರ್. ನರಹರಿ (9916904341)

**ಉ ಗಾ ಭೋ ಗ : ರಾ ಗ – ಕಾ ನ ಡ**

ನಿನ್ನ ಧ್ಯಾನದ ಶಕ್ತಿಯ ಕೊಡೊ
ಅನ್ಯರಲಿ ವಿರಕ್ತಿಯ ಕೊಡೊ
ನಿನ್ನ ನೋಡುವ ಯುಕ್ತಿಯ ಕೊಡೊ
ನಿನ್ನ ಪಾಡುವ ಭಕ್ತಿಯ ಕೊಡೊ
ನಿನ್ನತ್ತೆ ಬರುವ ಸಂಪತ್ತಿಯ ಕೊಡೊ
ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯ ಕೊಡೊ
ಅತ್ತತ್ತ ಮಾಡೊ ಭವಕತ್ತಲೆಯೆನಗೆ ಮುತ್ತಿದೆ ಹಯವದನ

**ರಾ ಗ – ಕ ಲ್ಯಾ ಣಿ : ತಾ ಳ – ಅ ಟ ತಾ ಳ**

ತಿಳಿಯದೊ ನಿನ್ನಾಟ । ತಿರುಪತಿಯ ವೆಂಕಟ । ಪ ।
ಪೊಳೆವ ನೀರೊಳು ಗೆಲುವ ಮೋರೆಯ ನೆಲವ ನೋಡುವ ಸುಳಿವ ಕಂಬದಿ
ಇಳೆಯನಳೆಯುವ ಭಳಿರೆ ಭಾರ್ಗವ ಖಳನ ಛೇದಿಸಿ ಕೊಳಲ ಧ್ವನಿಗೆ
ನಳಿನಮುಖಿಯರ ನಾಚಿಸುವ ಬಲು ಹಯದಳದ ಬಹು ಹವಣೆಗಾರನೆ । ಅ ಪ ।
ಆರು ಬಲ್ಲರು ನಿಮ್ಮ ಶ್ರೀಲಕುಮಿಯ ಮನಸಿಗೆ ತೋರುವಿಯೊ ಪರಬೊಮ್ಮ
ಉಳಿದವರು ಬಲ್ಲರೆ ನೀರಜಾಸನ ಬೊಮ್ಮ ಇದು ನಿನ್ನ ಮರ್ಮ
ನೀರೊಳಗೆ ಮನೆ ಭಾರ ಬೆನ್ನಿಲಿ ಕೋರೆದಾಡೆಯ ನಾರಸಿಂಹನೆ
ಧರೆಯ ಬೇಡಿದ ಧೀರಪುರುಷನೆ ವಾರಿಬಂಧನ ಮಾರಜನಕನೆ
ನಾರಿಯರ ವ್ರತವಳಿದು ಕುದುರೆ ಯೇರಿ ಮೆರೆಯುವ ಸುಂದರಾಂಗನೆ । ೧ ।
ಸಕಲಮಾಯವಿದೇನು ವೃಕನ ವಾಯು ಸಕನ ಸಲಹಿದೆ ನೀನು
ಭಕುತಿಯಲಿ ತುತಿಪರಿಗೆ ಸುರಧೇನು ಸುರಕಾಮಧೇನು
ನಿಖಿಳ ವೇದೋದ್ಧಾರ ಗಿರಿಧರ ಅಖಿಳ ಭೂಮಿಯ ತಂದ ನರಹರಿ
ಯುಕುತಿಯಲಿ ನೆಲವನಳೆದ ಭಾರ್ಗವ ಮುಕುತಿಗೋಸುಗ ಫಲವ ಸವಿದನೆ
ರುಕುಮನನುಜೆಯ ರಮಣ ಬೌದ್ಧನೆ ಲಕುಮಿರಮಣನೆ ಕಲ್ಕಿರೂಪಿಯೆ । ೨ ।
ನಿನ್ನ ರೂಪಿನ ಲೀಲ ನೋಡುವ ಜನಕೆ ಕಣ್ಣು ಸಾವಿರವಿಲ್ಲ
ನಾ ಪಾಡಿ ಪೊಗಳಲು ಪನ್ನಗಾಧಿಪನಲ್ಲ ನೀನರಿಯದಿಲ್ಲ
ಕಣ್ಣು ಮುಚ್ಚದೆ ಬೆನ್ನು ತೋರಿವಿ ಮಣ್ಣು ಕೆದರುವಿ ಚಿಣ್ಣಗೊಲಿದನೆ
ಸಣ್ಣವಾಮನ ಅಣ್ಣರಾಮನೆ ಪುಣ್ಯಪುರುಷನೆ ಬನ್ನ ಬಡಕನೆ
ಹೆಣ್ಣುಗಳ ವ್ರತಕೆಡಿಸಿ ತೇಜಿಯ ಬೆನ್ನನೇರಿದ ವ್ಯಾಸವಿಟ್ಠಲ । ೩ ।



**ರಾ ಗ – ಆ ನ ಂ ದ ಭೈ ರ ವಿ : ತಾ ಳ – ಆ ದಿ ತಾ ಳ**

ಶ್ರೀನಿವಾಸ ನೀನೆ ಪಾಲಿಸೊ ಶ್ರಿತಜನಪಾಲ ಗಾನಲೋಲ ಶ್ರೀಮುಕುಂದನೆ ।ಪ।
ಧ್ಯಾನಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಪ
ವೇಣುಗೋಪಾಲ ಗೋವಿಂದ ವೇದವೇದ್ಯ ನಿತ್ಯಾನಂದ ।ಅ ಪ।
ಎಂದಿಗೆ ನಿನ್ನ ಪಾದಾಬ್ಜವ ಪೊಂದುವ ಸುಖ ಎಂದಿಗೆ ಲಭ್ಯವೊ ಮಾಧವ
ಅಂಧಕಾರಣ್ಯದಲ್ಲಿ ನಿಂದು ತತ್ತರಿಸುತಿಹೆನೊ
ಅಂದದಿಂ ಈ ಭವದೊಳು ಬೆಂದು ನೊಂದೆನೊ ಮುಕುಂದ ।೧।
ಎಷ್ಟು ದಿನ ಕಷ್ಟಪಡುವುದೊ ಯಶೋದೆಕಂದ ದೃಷ್ಟಿಯಿಂದ ನೋಡಲಾಗದೊ
ಮುಟ್ಟಿ ನಿನ್ನ ಭಜಿಸಲಾರೆ, ಕೆಟ್ಟ ಈ ನರಜನ್ಮದೊಳು
ದುಷ್ಟಕಾರ್ಯ ಮಾಡಿದಾಗ್ಯೂ ಇಷ್ಟನಾಗಿ ಕೈಯ ಪಿಡಿದು ।೨।
ಅನುದಿನ ಅನೇಕ ರೋಗಗಳ ಅನುಭವಿಸಿದೆನೊ ಘನ್ನ ಮಹಿಮ ನೀನೆ ಕೇಳಯ್ಯ
ತನುವಿನಲ್ಲಿ ಬಲವಿಲ್ಲ, ನೆನೆದ ಮಾತ್ರ ಸಲಹುವ
ಹನುಮದೀಶ ಪುರಂದರವಿಟ್ಠಲನೆ ಕೈಯ ಪಿಡಿದು ।೩।

**ರಾ ಗ – ಅ ಠಾ ಣ : ತಾ ಳ – ಛಾ ಪು ತಾ ಳ**

ಸ್ಮರಣೆಯೊಂದೆ ಸಾಲದೆ, ಗೋವಿಂದನ ಸ್ಮರಣೆ ಒಂದೇ ಸಾಲದೆ ।ಪ।
ಪರಿಪರಿ ವಿಧವೆಲ್ಲ ಭ್ರಾಂತಿಯೆಂದು ತಿಳಿದು ಪರಮಪುರುಷ ಹರಿಯ ನೆರೆ ನಂಬಿದವರಿಗೆ ।ಅ ಪ।
ಪಾತಕಿಯಾದರೇನೊ ಸರ್ವಪ್ರಾಣಿ ಘಾತಕಿಯಾದರೇನೊ
ನೀತಿಯ ಬಿಟ್ಟು ದುಷ್ಕರ್ಮಿಯಾದರೇನೊ ಪ್ರೀತಿಯಿಂದಜಾಮಿಳನ ಸಲಹಿದ ಹರಿಯ।೧।

ಕಡುಮೂರ್ಖನಾದರೇನೊ ದುಷ್ಕರ್ಮವ ಹಿಡಿದಾತನಾದರೇನೊ
ಜಡನಾದರೇನಲ್ಪ ಜಾತಿಯಾದರೇನೊ ಬಿಡದೆ ಪ್ರಹ್ಲಾದನ ಸಲಹಿದ ಹರಿಯ ।೨।
ಸಕಲ ತೀರ್ಥಕ್ಷೇತ್ರದಿ ಮಾಡಿದಂಥ ನಿಖಿಳ ಪುಣ್ಯದ ಫಲವು
ಭಕುತಿ ಪೂರ್ವಕವಾಗಿ ಬಿಡದನುದಿನದಲ್ಲಿ ಪ್ರಕಟ ಪುರಂದರವಿಟ್ಠಲನ ನಾಮ ।೩।

**ಆ ಪ ತ್ತು ಪ ರಿ ಹಾ ರ ಉ ಗಾ ಭೋ ಗ : ರಾ ಗ – ಅ ಠಾ ಣ**

**ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಗೆ**
**ಅಂದವಾಗಿ ಪಿಡಿದು ದಿವಾರಾತ್ರಿಯಲಿ**
**ಬಂದು ಬದಿಯಲಿ ನಿತ್ಯ ಬಾರಾಸನಾಗಿ**
**ಹಿಂದುಮುಂದುಪದ್ರವಾಗದಂತೆ**
**ಇಂದಿರೆರಮಣ ಕಾಯುತ್ತಲಿರೆ ಎನಗಾವ**
**ಬಂಧನಗಳಿಲ್ಲ ಧನ್ಯ ಧನ್ಯ**
**ಕಂದರ್ಪನಯ್ಯ ಸಿರಿವಿಜಯವಿಟ್ಠಲರೇಯ**
**ಎಂದೆಂದಿಗಾಪತ್ತು ಬರಲೀಸನೊ**